# <u>ಕರ್ನಾಟಕ ವಿಧಾನ ಪರಿಷತ್ತು</u>

1. **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:** 758(928)
2. **ಮಾನ್ಯ ಸದಸ್ಯರ ಹೆಸರು** : ಶ್ರೀ ಎಸ್. ಎಲ್. ಭೋಜೇಗೌಡ ( ಶಿಕ್ಷಕರ ಕ್ಷೇತ್ರ)
3. **ಉತ್ತರಿಸಬೇಕಾದ ದಿನಾಂಕ** : **28/09/2020**
4. **ಉತ್ತರಿಸುವವರು** : **ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು**

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಕಾರ್ಮಿಕರ ರಕ್ಷಣೆಯಲ್ಲಿ ಸರ್ಕಾರವು ವಿಫಲವಾಗಿರುವುದು ಸರ್ಕಾರದ ಗಮನದಲ್ಲಿದೆಯೇ | ರಾಜ್ಯದಲ್ಲಿರುವ ಕಾರ್ಮಿಕರ ರಕ್ಷಣೆಗೆ ಇಲಾಖೆಯು ನಿರಂತರವಾಗಿ ಕಾರ್ಯನಿರ್ವಹಿಸುತ್ತಿದೆ. ಸಂಘಟಿತ ಕ್ಷೇತ್ರದಲ್ಲಿರುವ ಕಾರ್ಮಿಕರ ರಕ್ಷಣೆ ಮಾಡುವ ನಿಟ್ಟಿನಲ್ಲಿ ನಿರಂತರವಾಗಿ ವಿವಿಧ ಕಾರ್ಮಿಕ ಕಾಯ್ದೆಗಳಲ್ಲಿ ತಪಾಸಣೆಗಳನ್ನು ಕೈಗೊಂಡು ಮಾಲೀಕರು ಕಾರ್ಮಿಕ ಕಾಯ್ದೆಯನ್ನು ಅನುಷ್ಠಾನಗೊಳಿಸದೇ ಇರುವುದು ಕಂಡು ಬಂದಲ್ಲಿ ಅವರ ವಿರುದ್ಧ ಅನ್ವಯವಾಗುವ ಕಾರ್ಮಿಕ ಕಾಯ್ದೆಗಳಡಿ ಕ್ರಮಕೈಗೊಳ್ಳಲಾಗುತ್ತಿದೆ. ಕಳೆದ 3 ವರ್ಷಗಳಲ್ಲಿ ಪ್ರಮುಖ ಕಾಯ್ದೆಗಳಡಿಯಲ್ಲಿ ಕೈಗೊಂಡ ಕ್ರಮಗಳ ಬಗ್ಗೆ ಮಾಹಿತಿಯನ್ನು ಅನುಬಂಧ–1ರಲ್ಲಿ ಲಗತ್ತಿಸಿದೆ.<br>ಕಾರ್ಮಿಕ ಇಲಾಖೆಯ ಅಧೀನದಲ್ಲಿರುವ ವಿವಿಧ ಮಂಡಳಿಗಳ ಮೂಲಕ ಅಸಂಘಟಿತ ವರ್ಗದ ಕಾರ್ಮಿಕರಿಗೆ ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಕೂಡ ಒದಗಿಸಲಾಗುತ್ತಿದೆ. |
| ಆ) | ಕಾರ್ಮಿಕರಿಗೆ ಸಿಗಬೇಕಾದ ಸವಲತ್ತುಗಳು ಸರಿಯಾಗಿ ದೊರಕುತ್ತಿವೆಯೇ ಹಾಗಿದ್ದಲ್ಲಿ ಸರ್ಕಾರದ ವತಿಯಿಂದ ಕಾರ್ಮಿಕರಿಗೆ ಸಿಗುವ ಸವಲತ್ತುಗಳೇನು. | **ಹೌದು,**<br>ಕಾರ್ಮಿಕ ಇಲಾಖೆಯ ಅಧೀನದಲ್ಲಿ ಬರುವ ಈ ಕೆಳಕಂಡ ಮಂಡಳಿಗಳಿಂದ ಕಾರ್ಮಿಕರಿಗೆ ಹಲವಾರು ಸೌಲಭ್ಯಗಳನ್ನು ನೀಡಲಾಗುತ್ತಿದೆ. ವಿವರಗಳು ಈ ಕೆಳಕಂಡಂತೆ ಇರುತ್ತದೆ.<br>**I. ಕಲ್ಯಾಣ ಮತ್ತು ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ** ವತಿಯಿಂದ ನೋಂದಾಯಿತ ಕಾರ್ಮಿಕರಿಗೆ 19 ವಿವಿಧ ರೀತಿಯ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ರೂಪಿಸಲಾಗಿರುತ್ತದೆ. ವಿವರಗಳನ್ನು ಅನುಬಂಧ-2ರಲ್ಲಿ ಒದಗಿಸಿದೆ.<br>**II. ಅಸಂಘಟಿತ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಒದಗಿಸಲು ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.** |

**(1) ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:–** ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಾಲಕರಿಗೆ ಸಂಬಂಧಪಟ್ಟಂತೆ ಯೋಜನೆಯಡಿ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.

**(ಅ) ಅಪಘಾತ ಪರಿಹಾರ:–** ಅಪಘಾತದಿಂದಾದ ಮರಣ ಪ್ರಕರಣಗಳಲ್ಲಿ ರೂ. 5 ಲಕ್ಷ ಪರಿಹಾರ, ಸಂಪೂರ್ಣ ಶಾಶ್ವತ ದುರ್ಬಲತೆ ಪ್ರಕರಣಗಳಲ್ಲಿ ರೂ.2 ಲಕ್ಷ ಪರಿಹಾರ ಮತ್ತು ಒಳರೋಗಿಯಾಗಿ ಚಿಕಿತ್ಸೆ ಪಡೆದಲ್ಲಿ ರೂ.1 ಲಕ್ಷದವರೆಗೂ ಚಿಕಿತ್ಸಾ ವೆಚ್ಚದ ಮರುಪಾವತಿ ನೀಡಲಾಗುವುದು.

**ಸಾಧನೆ:–** ಯೋಜನೆಯಡಿ ಈವರೆಗೆ ಪರಿಹಾರ ನೀಡಲ್ಪಟ್ಟ ಪ್ರಕರಣಗಳ ವಿವರ ಹೀಗಿದೆ:-

| ಕ್ರ ಸಂ | ವಿವರಣೆ | ಪ್ರಕರಣ | ಪರಿಹಾರದ ಮೊತ್ತ |
|---|---|---|---|
| 1 | ಮರಣ | 557 | ರೂ.18,30,50,000/– |
| 2 | ಶಾಶ್ವತ ದುರ್ಬಲತೆ | 05 | ರೂ.5,00,000/– |
| 3 | ಆಸ್ಪತ್ರೆ ವೆಚ್ಚದ ಮರುಪಾವತಿ/ತಾತ್ಕಾಲಿಕ ದುರ್ಬಲತೆ | 138 | ರೂ.51,94,251/– |
| | ಒಟ್ಟು | 700 | ರೂ.18,87,44,251/– |

**(ಆ) ಶೈಕ್ಷಣಿಕ ಧನ ಸಹಾಯ:–** ಅಪಘಾತದ ಕಾರಣ ನಿಧನರಾದ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಇಬ್ಬರು ಮಕ್ಕಳಿಗೆ ಪದವಿಪೂರ್ವ ವ್ಯಾಸಂಗದವರೆಗೆ ವಾರ್ಷಿಕ 10,000/– ರೂ.ಗಳ ಶೈಕ್ಷಣಿಕ ಸಹಾಯಧನ ನೀಡಲಾಗುತ್ತಿದೆ.

**ಸಾಧನೆ:** ಈವರೆಗೆ ವಿವಿಧ ತರಗತಿಗಳಲ್ಲಿ ವ್ಯಾಸಂಗ ಮಾಡುತ್ತಿರುವ 321 ವಿದ್ಯಾರ್ಥಿಗಳಿಗೆ ಒಟ್ಟು ರೂ.32,10,000/–ಗಳ ಶೈಕ್ಷಣಿಕ ಸಹಾಯ ಧನ ವಿತರಿಸಲಾಗಿದೆ.

**(ಇ)ಶ್ರಮ ಸಮ್ಮಾನ ಪ್ರಶಸ್ತಿ :**

- ಪ್ರತಿ ವರ್ಷ 2020ರ ಮಾರ್ಚ್ 01 ರಂದು ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಕಾರ್ಮಿಕ ಸಮ್ಮಾನ ದಿನಾಚರಣೆ ಆಚರಿಸಿ, ಉತ್ತಮ ಹಾಗೂ ಸುರಕ್ಷತಾ ಚಾಲನೆ ಮಾಡಿದ ತ್ರಿಚಕ್ರ ಹಾಗೂ ನಾಲ್ಕು ಚಕ್ರದ ವಾಹನ ಚಾಲಕರಿಗೆ ಪ್ರತಿ ಜಿಲ್ಲೆಗೆ ಪ್ರತ್ಯೇಕವಾಗಿ ಪ್ರಥಮ, ದ್ವಿತೀಯ ಹಾಗೂ ತೃತೀಯ ಪ್ರಶಸ್ತಿ ಮತ್ತು 8 ವಿಶೇಷ ಪುರಸ್ಕಾರ ಪ್ರಶಸ್ತಿಗಳು ಸೇರಿ ಒಟ್ಟು ರಾಜ್ಯಾದ್ಯಂತ 660 ಚಾಲಕರಿಗೆ "ಶ್ರಮ ಸಮ್ಮಾನ ಪ್ರಶಸ್ತಿ" ನೀಡಿ ಗೌರವಿಸಲಾಗುತ್ತದೆ.

- ಪ್ರಥಮ ಪ್ರಶಸ್ತಿಯು ರೂ. 15,000/–ಗಳ ಮೌಲ್ಯದ ಚಿನ್ನದ ಪದಕ, ದ್ವಿತೀಯ ಪ್ರಶಸ್ತಿಯು ರೂ. 10,000/– ಮೌಲ್ಯದ ಬೆಳ್ಳಿ ಪದಕ ಹಾಗೂ ತೃತೀಯ ಪ್ರಶಸ್ತಿಯು ರೂ. 8,000/– ಮೌಲ್ಯದ ಬೆಳ್ಳಿ ಪದಕ ಹೊಂದಿದ್ದು, ವಿಶೇಷ ಪುರಸ್ಕಾರವು ರೂ.1,000/–ಗಳ ನಗದು ಬಹುಮಾನ ಹಾಗೂ ಪ್ರಶಂಸಾ ಪತ್ರವನ್ನು ಹೊಂದಿರುತ್ತದೆ.

| | | |
|---|---|---|
| | | (ಈ) **ಅಪಘಾತ ಜೀವ ರಕ್ಷಕ:-** ಅಪಘಾತಕ್ಕೊಳಗಾದ ಗಾಯಾಳುಗಳನ್ನು ರಕ್ಷಿಸುವ ಸ್ವಯಂಸೇವಕರನ್ನು ಸೃಷ್ಟಿಸುವ ಉದ್ದೇಶದಿಂದ ಅಪಘಾತ ಜೀವರಕ್ಷಕ ಕಾರ್ಯಕ್ರಮದಡಿ ಚಾಲಕರಿಗೆ ಪ್ರಥಮ ಚಿಕಿತ್ಸಾ ತರಬೇತಿಯನ್ನು ನೀಡಲಾಗುತ್ತಿದೆ.<br>**ಈ ಯೋಜನೆಯಡಿ:-**<br>❖ ಈವರೆಗೆ ಒಟ್ಟು **38,569** ಚಾಲಕರಿಗೆ ಪ್ರಥಮ ಚಿಕಿತ್ಸಾ ತರಬೇತಿ ನೀಡಿ ಅಪಘಾತ ಜೀವರಕ್ಷಕರನ್ನಾಗಿ ಸಜ್ಜುಗೊಳಿಸಿದೆ.<br><br>**(2) <u>ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-</u>**<br><br>**(ಅ) "ಸ್ಮಾರ್ಟ್ ಕಾರ್ಡ್":-** ಯೋಜನೆಯಡಿ ಅಸಂಘಟಿತ ವಲಯದ 11 ವರ್ಗಗಳಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಮಂಡಕ್ಕಿ ಭಟ್ಟಿ ಕಾರ್ಮಿಕ"ರನ್ನು ನೋಂದಾಯಿಸಿ ಸ್ಮಾರ್ಟ್ ಕಾರ್ಡ್ ವಿತರಿಸಲಾಗುತ್ತಿದೆ.<br><u>ಸಾಧನೆ:</u> ಈವರೆಗೆ ಸದರಿ ವರ್ಗಗಳ 53,672 ಕಾರ್ಮಿಕರನ್ನು ನೋಂದಾಯಿಸಿ ಸ್ಮಾರ್ಟ್ ಕಾರ್ಡ್ ವಿತರಿಸಲಾಗಿದೆ.<br><br>**(ಆ) ಶ್ರಮ ಸಮ್ಮಾನ ಪ್ರಶಸ್ತಿ:**<br>➢ ಪ್ರತಿ ವರ್ಷ 2020ರ ಮಾರ್ಚ್ 01 ರಂದು ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಕಾರ್ಮಿಕ ಸಮ್ಮಾನ ದಿನಾಚರಣೆ ಆಚರಿಸಿ, 11 ಅಸಂಘಟಿತ ವಲಯಗಳಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ" ವಲಯಗಳಲ್ಲಿ ವಿಶೇಷ ಸಾಧನೆ ಮಾಡಿದ ಕಾರ್ಮಿಕರನ್ನು ಗುರುತಿಸಿ, ಪ್ರತಿಯೊಂದು ಜಿಲ್ಲೆಗೆ ಪ್ರತಿಯೊಂದು ವಲಯಕ್ಕೆ ಪ್ರಥಮ, ದ್ವಿತೀಯ ಹಾಗೂ ತೃತೀಯ ಪ್ರಶಸ್ತಿ ಮತ್ತು 8 ವಿಶೇಷ ಪುರಸ್ಕಾರ ಪ್ರಶಸ್ತಿಗಳು ಸೇರಿ ಒಟ್ಟು 3630 ಕಾರ್ಮಿಕರಿಗೆ "ಶ್ರಮ ಸಮ್ಮಾನ ಪ್ರಶಸ್ತಿ" ನೀಡಿ ಗೌರವಿಸಲಾಗುತ್ತಿದೆ.<br><br>➢ ಪ್ರಥಮ ಪ್ರಶಸ್ತಿಯು ರೂ. 15,000ಗಳ ಮೌಲ್ಯದ ಚಿನ್ನದ ಪದಕ, ದ್ವಿತೀಯ ಪ್ರಶಸ್ತಿಯು ರೂ. 10,000ದ ಮೌಲ್ಯದ ಬೆಳ್ಳಿ ಪದಕ ಹಾಗೂ ತೃತೀಯ ಪ್ರಶಸ್ತಿಯು ರೂ. 8,000ದ ಮೌಲ್ಯದ ಬೆಳ್ಳಿ ಪದಕ ಹೊಂದಿದ್ದು, ವಿಶೇಷ ಪುರಸ್ಕಾರವು ರೂ.1,000/-ಗಳ ನಗದು ಬಹುಮಾನ |

| | | |
|---|---|---|
| | | ಹಾಗೂ ಪ್ರಶಂಸಾಪತ್ರವನ್ನು ಹೊಂದಿರುತ್ತದೆ.<br><br>**(ಇ) ಕಾರ್ಮಿಕ ಸೇವಾ ಕೇಂದ್ರ :–**<br>➢ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ 2008ರ ಕಲಂ 9ರನ್ವಯ ಫಲಾನುಭವಿಗಳಲ್ಲಿ ಅಸಂಘಟಿತ ಕಾರ್ಮಿಕರಿಗೆ ಲಭ್ಯವಿರುವ ಎಲ್ಲಾ ಯೋಜನೆಗಳ ಕುರಿತು ಮಾಹಿತಿ ನೀಡಲು, ಯೋಜನೆಗಳ ಸೌಲಭ್ಯಗಳನ್ನು ಪಡೆದುಕೊಳ್ಳಲು ಅವಶ್ಯಕವಿರುವ ದಾಖಲಾತಿಗಳನ್ನು ಸಿದ್ಧಪಡಿಸಲು ಹಾಗೂ ನಿಗಧಿಪಡಿಸಿದ ಅರ್ಜಿ ನಮೂನೆಗಳನ್ನು ಭರ್ತಿ ಮಾಡಿ ಸಂಬಂಧಪಟ್ಟವರಿಗೆ ರವಾನಿಸಲು ಸಹಾಯವಾಗುವಂತೆ ರಾಜ್ಯದ ಎಲ್ಲಾ 175 ತಾಲ್ಲೂಕುಗಳಲ್ಲಿ ತಲಾ ಒಂದರಂತೆ ಕಾರ್ಮಿಕ ಸೇವಾ ಕೇಂದ್ರಗಳನ್ನು ಹಾಗೂ ಬೆಂಗಳೂರು ವ್ಯಾಪ್ತಿಯಲ್ಲಿ 6 ಕಾರ್ಮಿಕ ಸೇವಾ ಕೇಂದ್ರಗಳು ಸೇರಿ ಒಟ್ಟು 181 ಕಾರ್ಮಿಕ ಸೇವಾ ಕೇಂದ್ರಗಳನ್ನು ತೆರೆಯಲು ನಿರ್ಣಯಿಸಿದ್ದು, ಈಗಾಗಲೇ 159 ತಾಲ್ಲೂಕುಗಳಲ್ಲಿ ಕಾರ್ಮಿಕ ಸೇವಾ ಕೇಂದ್ರಗಳನ್ನು ಸ್ಥಾಪಿಸಲಾಗಿದೆ.<br><br>➢ ಕಾರ್ಮಿಕ ಇಲಾಖೆ ಹಾಗೂ ಅದರ ಅಧೀನದಲ್ಲಿ ಬರುವ ಮಂಡಳಿಗಳು ಅಸಂಘಟಿತ ಕಾರ್ಮಿಕರಿಗೆ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ಕುರಿತು ಮಾಹಿತಿ, ಸಹಾಯ ಹಾಗೂ ಸೌಲಭ್ಯಗಳನ್ನು, ಸದರಿ ಸೇವಾ ಕೇಂದ್ರಗಳಲ್ಲಿ ಕಾರ್ಮಿಕ ಬಂಧುಗಳ ಮೂಲಕ ಪಡೆಯಲು ವ್ಯವಸ್ಥೆ ಮಾಡಲಾಗುತ್ತಿದೆ.<br><br>**ಸಾಧನೆ:** ರಾಜ್ಯದಾದ್ಯಂತ ಈವರೆಗೆ 159 ತಾಲ್ಲೂಕುಗಳಲ್ಲಿ ಕಾರ್ಮಿಕ ಸೇವಾ ಕೇಂದ್ರಗಳನ್ನು ಸ್ಥಾಪಿಸಲಾಗಿದ್ದು ಕಾರ್ಮಿಕ ಇಲಾಖೆ ಹಾಗೂ ಇಲಾಖೆಯ ಅಧೀನದಲ್ಲಿ ಬರುವ ಮಂಡಳಿಗಳು ಮತ್ತು ಸೊಸೈಟಿಯ ಮೂಲಕ ಜಾರಿಗೊಳಿಸುತ್ತಿರುವ ಯೋಜನೆಗಳ ಕುರಿತಾದ ಮಾಹಿತಿಯನ್ನು ಹಾಗೂ ಸೌಲಭ್ಯಗಳನ್ನು ಪಡೆಯಲು ಬೇಕಾದ ಎಲ್ಲಾ ರೀತಿಯ ಸಹಾಯವನ್ನು ಕಾರ್ಮಿಕರಿಗೆ ನೀಡಲಾಗುತ್ತಿದೆ.<br><br>(3) **(ಅ)ಪ್ರಧಾನ ಮಂತ್ರಿ ಶ್ರಮಯೋಗಿ ಮಾನ್‌ಧನ್ ಯೋಜನೆ (ಪಿಎಂ–ಎಸ್‌ವೈಎಂ):–** ಕೇಂದ್ರ ಸರ್ಕಾರದ ಈ ಯೋಜನೆಯಡಿ 18 – 40 ವರ್ಷ ವಯೋಮಾನದ ಅಸಂಘಟಿತ ಕಾರ್ಮಿಕರು ನೊಂದಾಯಿಸಿಕೊಂಡು 60 ವರ್ಷ ಪೂರೈಸಿದ ನಂತರ ಮಾಸಿಕ ನಿಶ್ಚಿತ ರೂ.3,000/– ಗಳ ಪಿಂಚಣಿ ಸೌಲಭ್ಯ ಪಡೆಯಬಹುದಾಗಿದೆ. ಈ ಯೋಜನೆಯಡಿ ಫಲಾನುಭವಿಗಳಿಗೆ ಅವರ ವಯಸ್ಸಿನ ಆಧಾರದ ಮೇಲೆ ಮಾಸಿಕ ತಲಾ ರೂ. 55/– ರಿಂದ ರೂ. 200/– ರವರೆಗೆ ಕೇಂದ್ರ ಸರ್ಕಾರವು ಸಮಾನಾಂತರ |

| | | |
|---|---|---|
| | | ವಂತಿಕೆಯನ್ನು ಪಾವತಿಸುತ್ತದೆ.<br><br>**ಸಾಧನೆ:-** ಪ್ರಧಾನ ಮಂತ್ರಿ ಶ್ರಮ್ ಯೋಗಿ ಮಾನ್-ಧನ್ (ಪಿಎಂ-ಎಸ್‌ವೈಎಂ) ಯೋಜನೆಯಡಿ ಇಲ್ಲಿಯವರೆಗೆ ಒಟ್ಟು **95620** ಫಲಾನುಭವಿಗಳನ್ನು ನೋಂದಾಯಿಸಲಾಗಿದೆ.<br><br>**III.** **<u>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ</u>** ಈ ಮಂಡಳಿಗೆ ವಂತಿಗೆ ಪಾವತಿ ಮಾಡುವ ವಿವಿಧ ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರಿಗೆ ಕಾರ್ಮಿಕ ಕಲ್ಯಾಣ ಯೋಜನೆಯಡಿ ವಿವಿಧ ಸೌಲಭ್ಯ ನೀಡಲಾಗುತ್ತಿದೆ. ಈ ಯೋಜನೆಗಳ ಅನುಷ್ಠಾನಕ್ಕಾಗಿ ರಾಜ್ಯ ಸರ್ಕಾರವು ಪ್ರಸಕ್ತ ಸಾಲಿನಲ್ಲಿ ರೂ. 7.18 ಕೋಟಿಗಳನ್ನು ಒದಗಿಸಿರುತ್ತದೆ.<br>ಮಂಡಳಿಯಿಂದ ನೀಡಲಾಗುವ ಸೌಲಭ್ಯಗಳು ಹಾಗೂ 2019-20ನೇ ಸಾಲಿನಲ್ಲಿ ನೀಡಿರುವ ಕಲ್ಯಾಣ ಯೋಜನೆಗಳ ವಿವರಗಳನ್ನು **<u>ಅನುಬಂಧ-3(ಎ) ಮತ್ತು</u> 3(ಬಿ)**ರಲ್ಲಿ ಲಗತ್ತಿಸಿದೆ. |
| ಇ) | ಲಾಕ್‌ಡೌನ್ ಸಮಯದಲ್ಲಿ ಕಾರ್ಮಿಕರ ರಕ್ಷಣೆ ಮತ್ತು ಅವರ ಜೀವನ ನಿರ್ವಹಣೆಗೆ ಸರ್ಕಾರದ ಮಟ್ಟದಲ್ಲಿ ಕೈಗೊಂಡ ಕ್ರಮಗಳೇನು | ಕಾರ್ಮಿಕ ಇಲಾಖೆಯ ಅಧೀನದಲ್ಲಿ ಬರುವ ಮಂಡಳಿಗಳು ಕೋವಿಡ್-19 ಸಂಕಷ್ಟದಿಂದ ಉಂಟಾದ ಲಾಕ್‌ಡೌನ್ ಸಮಯದಲ್ಲಿ ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತವೆ.<br><br>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ ವತಿಯಿಂದ** ಕೋವಿಡ್-19ರ ಸಂಕಷ್ಟದ ಸಂದರ್ಭದಲ್ಲಿ ಸರ್ಕಾರವು ಲಾಕ್‌ಡೌನ್ ಜಾರಿಗೊಳಿಸಿದ್ದ ಪರಿಣಾಮವಾಗಿ ಕಾರ್ಮಿಕರಿಗೆ ಆರ್ಥಿಕವಾಗಿ ನಷ್ಟವಾಗಿರುವುದನ್ನು ಗಮನಿಸಿ, ದಿನಾಂಕ: 06-05-2020ರಂದು, ಅಗಸರು ಹಾಗೂ ಕ್ಷೌರಿಕ ವೃತ್ತಿಯಲ್ಲಿ ತೊಡಗಿರುವ ಅಸಂಘಟಿತ ಕಾರ್ಮಿಕರಿಗೆ ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ ಒಂದು ಬಾರಿ ತಲಾ ರೂ.5,000/-ಗಳ ನೆರವನ್ನು ಸರ್ಕಾರದಿಂದ ಘೋಷಿಸಲಾಗಿದೆ.<br><br>ದಿನಾಂಕ:15-08-2020 ರವರೆಗೆ ಅಗಸ ವೃತ್ತಿ ನಿರ್ವಹಿಸುತ್ತಿರುವ 74,782 ಮತ್ತು ಕ್ಷೌರಿಕ ವೃತ್ತಿ ನಿರ್ವಹಿಸುತ್ತಿರುವ 66,820 ಅರ್ಜಿದಾರರು ಸೇರಿದಂತೆ ಒಟ್ಟು 1,41,602 ಅರ್ಜಿಗಳನ್ನು ಸ್ವೀಕರಿಸಲಾಗಿದೆ. ಅವುಗಳಲ್ಲಿ ಈವರೆಗೆ 1,14,388 ಅರ್ಜಿದಾರರಿಗೆ ತಲಾ ರೂ.5,000/-ಗಳಂತೆ ಒಟ್ಟು ರೂ.57.19ಕೋಟಿ ಮೊತ್ತವನ್ನು ಅವರವರ ಬ್ಯಾಂಕ್ ಖಾತೆಗೆ ಡಿ.ಬಿ.ಟಿ ಮೂಲಕ ವರ್ಗಾಯಿಸಲಾಗಿದೆ.<br><br>ಯೋಜನೆಯ ಷರತ್ತುಗಳನ್ನು ಪೂರ್ಣಗೊಳಿಸದ 1924 ಅರ್ಜಿಗಳನ್ನು ತಿರಸ್ಕರಿಸಲಾಗಿದ್ದು, ತಾಂತ್ರಿಕ ಕಾರಣಗಳು ಸೇರಿದಂತೆ ಷರತ್ತುಗಳನ್ನು ಪೂರೈಸದ ಹಾಗೂ ಕ್ರಮಬದ್ಧವಲ್ಲದ 25,290 ಅರ್ಜಿಗಳ ಮರು ಪರಿಶೀಲನೆ ನಡೆಸಲಾಗುತ್ತಿದ್ದು, ಅರ್ಹ ಫಲಾನುಭವಿಗಳು ಕಂಡು ಬಂದಲ್ಲಿ ನೆರವಿನ ಮೊತ್ತವನ್ನು |

ಪಾವತಿಸಲು ಕ್ರಮಕೈಗೊಳ್ಳಲಾಗುವುದು

**<u>ಕೋವಿಡ್-19ರ ಹಿನ್ನೆಲೆಯಲ್ಲಿ ಮಂಡಳಿಯಿಂದ ತೆಗೆದುಕೊಂಡ ಇತರೆ ಕ್ರಮಗಳು:-</u>**

- ಅಸಂಘಟಿತ ಕಾರ್ಮಿಕರಿಗೆ ಸ್ಯಾನಿಟೈಸರ್, ಮಾಸ್ಕ್ ಹಾಗೂ ಸಾಬೂನು ವಿತರಿಸಲು ಮತ್ತು ಇತರೆ ಪ್ರಚಾರ ಕಾರ್ಯಕ್ರಮಗಳಿಗಾಗಿ ಪ್ರತಿ ಜಿಲ್ಲಾ ಕಾರ್ಮಿಕ ಅಧಿಕಾರಿಗಳಿಗೆ ತಲಾ ರೂ.5.00 ಲಕ್ಷಗಳಂತೆ ಒಟ್ಟು ರೂ.2.05ಕೋಟಿಗಳನ್ನು ಬಿಡುಗಡೆಗೊಳಿಸಲಾಗಿದೆ.

ಸಂಕಷ್ಟಕ್ಕೊಳಗಾದ ಅಸಂಘಟಿತ ವಲಯದ ವಲಸೆ ಕಾರ್ಮಿಕರಿಗೆ, ವಿವಿಧ ಕಲ್ಯಾಣ ಮಂಟಪ ಹಾಗೂ ಇತರೆ ಖಾಸಗಿ ಕಟ್ಟಡಗಳಲ್ಲಿ ತಂಗಲು ವ್ಯವಸ್ಥೆ ಮಾಡಲಾಗಿದ್ದು, ಅದಕ್ಕೆ ತಗಲುವ ಬಾಡಿಗೆ ಹಾಗೂ ಆಹಾರ ಪೂರೈಕೆಯ ವೆಚ್ಚವನ್ನು ಭರಿಸಲು 'ಕರ್ನಾಟಕ ರಾಜ್ಯ ಅಧ್ಯಯನ ಸಂಸ್ಥೆಗೆ ರೂ.1.00 ಕೋಟಿಗಳನ್ನು ಮಂಡಳಿಯಿಂದ ಬಿಡುಗಡೆಗೊಳಿಸಿದೆ.

**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ವತಿಯಿಂದ,**

ಕೋವಿಡ್-19 ಲಾಕ್‌ಡೌನ್ ಸಮಯದಲ್ಲಿ ಮಂಡಳಿಯಿಂದ ಎಲ್ಲಾ ಕಟ್ಟಡ ಕಾರ್ಮಿಕರು ಮತ್ತು ಕಂದಾಯ ಹಾಗೂ ಪೋಲೀಸ್ ಇಲಾಖೆಯವರು ನೀಡಿದ ಮಾಹಿತಿಯನ್ವಯ ವಲಸೆ ಕಾರ್ಮಿಕರು ಮತ್ತು ಅಸಂಘಟಿತ ಕಾರ್ಮಿಕರ ರಕ್ಷಣೆಗಾಗಿ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ.

1. ಮಂಡಳಿವತಿಯಿಂದ 16,48,431 ನೋಂದಾಯಿತ ಫಲಾನುಭವಿಗಳಿಗೆ ತಲಾ ರೂ.5,000/- ಗಳಂತೆ ಒಟ್ಟು ರೂ. 824.21 ಕೋಟಿ ಸಹಾಯ ಧನವನ್ನು ನೇರವಾಗಿ ಕಾರ್ಮಿಕರ ಬ್ಯಾಂಕ್ ಖಾತೆಗಳಿಗೆ ಜಮಾ ಮಾಡಲಾಗಿರುತ್ತದೆ.
2. ಕಟ್ಟಡ ಮತ್ತು ವಲಸೆ ಕಟ್ಟಡ ಕಾರ್ಮಿಕರಿಗೆ ಕೋರೋನಾ ವೈರಸ್ ಬಗ್ಗೆ ಅರಿವು ಮೂಡಿಸಲು ಮತ್ತು ಮಾಸ್ಕ್ ಸ್ಯಾನಿಟೈಸರ್ ಹಾಗೂ ಸೋಪುಗಳನ್ನು ಕಾರ್ಮಿಕರಿಗೆ ವಿತರಣೆ ಮಾಡಲು 41 ಉಪ ವಿಭಾಗ ಮಟ್ಟದ ಕಾರ್ಮಿಕ ಅಧಿಕಾರಿಗಳಿಗೆ ಪ್ರತಿ ಉಪವಿಭಾಗಕ್ಕೆ ರೂ.10 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ.
3. ಮಂಡಳಿಯ ವತಿಯಿಂದ ಬೆಂಗಳೂರಿನಲ್ಲಿ ಸ್ಥಾಪಿಸಲಾಗಿದ್ದ 10 ಶಿಶುಪಾಲನಾ ಕೇಂದ್ರಗಳಲ್ಲಿನ ಮಕ್ಕಳಿಗಾಗಿ Packed Nutrition Food & Toys ಗಳನ್ನು ಪೋಷಕರ ಮನೆಗಳಿಗೆ ತಲುಪಿಸಲಾಗಿರುತ್ತದೆ.
4. ಕಟ್ಟಡ ಮತ್ತು ವಲಸೆ ಕಟ್ಟಡ ಕಾರ್ಮಿಕರಿಗೆ ಆಹಾರ ಒದಗಿಸಲು ಮತ್ತು ಅವರ ಸಮಸ್ಯೆಗಳನ್ನು ಆಲಿಸಲು 24*7 ಸಹಾಯವಾಣಿ (155214) ಯನ್ನು ಸ್ಥಾಪಿಸಲಾಗಿರುತ್ತದೆ.
5. ವಸತಿ ರಹಿತ ಕಟ್ಟಡ ಮತ್ತು ವಲಸೆ ಕಟ್ಟಡ ಕಾರ್ಮಿಕರಿಗೆ ಜಿಲ್ಲಾಡಳಿತದ ಸಹಕಾರದೊಂದಿಗೆ ವಸತಿ ಸೌಲಭ್ಯ ಮತ್ತು ಊಟವನ್ನು ಒದಗಿಸಲಾಗಿರುತ್ತದೆ.
6. ಕಟ್ಟಡ ಮತ್ತು ವಲಸೆ ಕಟ್ಟಡ ಕಾರ್ಮಿಕರಿಗೆ ಲಾಕ್ ಡೌನ್ ಪ್ರಾರಂಭದಿಂದ ಇದುವರೆಗೂ 89.86 ಲಕ್ಷ ಸಿದ್ಧಪಡಿಸಿದ

| | | |
|---|---|---|
| | | ಆಹಾರದ ಪ್ಯಾಕೆಟ್ ಗಳನ್ನು ವಿತರಿಸಲಾಗಿರುತ್ತದೆ.<br>7. ಕಟ್ಟಡ ಮತ್ತು ವಲಸೆ ಕಟ್ಟಡ ಕಾರ್ಮಿಕರಿಗೆ 6.08 ಲಕ್ಷ ಆಹಾರ ಸಾಮಾಗ್ರಿಗಳ ಕಿಟ್ ಗಳನ್ನು ತಯಾರಿಸಿ ವಿತರಿಸಲಾಗುತ್ತಿದೆ.<br>ಕಂದಾಯ ಮತ್ತು ಇತರೆ ಇಲಾಖೆಗಳಿಂದ ವಲಸೆ ಕಟ್ಟಡ ಕಾರ್ಮಿಕರನ್ನು ತಮ್ಮ ತವರು ರಾಜ್ಯಗಳಿಗೆ ವಿಶೇಷ ಶ್ರಮಿಕ್ ರೈಲುಗಳ ಮೂಲಕ ಕಳುಹಿಸಲು ಅಗತ್ಯ ಕ್ರಮ ಕೈಗೊಂಡಿದ್ದು, ಸದರಿ ವಲಸೆ ಕಟ್ಟಡ ಕಾರ್ಮಿಕರುಗಳು ಲಾಕ್‌ಡೌನ್ ಸಂದರ್ಭದಲ್ಲಿ ತಮ್ಮ ತವರು ರಾಜ್ಯಗಳಿಗೆ ಶ್ರಮಿಕ್ ರೈಲುಗಳ ಮೂಲಕ ಪ್ರಯಾಣಿಸಿದ ಸಂದರ್ಭದಲ್ಲಿ ಮಂಡಳಿಯಿಂದ ಸಿದ್ಧಪಡಿಸಿದ ಆಹಾರ, ಬೇಯಿಸಿದ ಮೊಟ್ಟೆ, ಹಣ್ಣುಗಳು, ನೀರಿನ ಬಾಟಲ್ ಮತ್ತು ಮಜ್ಜಿಗೆಯನ್ನು ವಿತರಿಸಲಾಗಿರುತ್ತದೆ. |
| **ಈ)** | ಕಾರ್ಮಿಕರು ಈ ಕ್ಲಿಷ್ಟಕರ ಸನ್ನಿವೇಶವಾದ ಕೋವಿಡ್-19 ಸಮಯದಲ್ಲಿ ಉದ್ಯೋಗವಿಲ್ಲದೆ ಕಷ್ಟಪಡುತ್ತಿದ್ದು, ಇವರಿಗೆ ಉದ್ಯೋಗ ಭದ್ರತೆ ನೀಡುವಲ್ಲಿ ಸರ್ಕಾರದ ಹೆಜ್ಜೆ ಇಟ್ಟಿದೆಯೇ ಹಾಗಿದ್ದಲ್ಲಿ ಯಾವ ರೀತಿ ಕ್ರಮ ಕೈಗೊಂಡಿದೆ (ಪೂರ್ಣ ಮಾಹಿತಿ ನೀಡುವುದು) | ಅನ್ವಯಿಸುವುದಿಲ್ಲ. |
| ಉ) | ಎಷ್ಟೋ ಕಾರ್ಮಿಕರಿಗೆ ತಿಂಗಳಿಗೆ ಸರಿಯಾಗಿ ಸಂಬಳ ದೊರೆಯದೆ, ಎರಡು ತಿಂಗಳಿಗೋ ಮೂರು ತಿಂಗಳಿಗೋ ವೇತನ ದೊರಕುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? ಹಾಗಿದ್ದಲ್ಲಿ ಕಾರ್ಮಿಕರಿಗೆ ತಿಂಗಳಿಗೆ ಸರಿಯಾಗಿ ವೇತನ ದೊರಕುವಂತೆ ಸರ್ಕಾರ ಕೈಗೊಂಡ ಕ್ರಮಗಳೇನು? | **ಹೌದು,**<br>ಇಲಾಖೆಯಿಂದ ವೇತನ ಪಾವತಿ ಕಾಯ್ದೆ, 1936ರಡಿ ನಿರಂತರವಾಗಿ ತಪಾಸಣೆಗಳನ್ನು ನಡೆಸಲಾಗುತ್ತಿದೆ. ಕಳೆದ 3 ವರ್ಷಗಳಲ್ಲಿ ರಾಜ್ಯದಾದ್ಯಂತ ವೇತನ ಪಾವತಿಯಾಗದೇ ಇರುವ 944 ಪ್ರಕರಣಗಳನ್ನು ಗುರುತಿಸಲಾಗಿದ್ದು, ಈ ಪ್ರಕರಣಗಳಲ್ಲಿ ಸಕ್ಷಮ ಪ್ರಾಧಿಕಾರಗಳ ಮುಂದೆ ಕ್ಲೈಮ್ ದಾಖಲಿಸಲಾಗಿರುತ್ತದೆ. ಜಿಲ್ಲಾವಾರು ವಿವರಗಳನ್ನು **ಅನುಬಂಧ-1** ರಲ್ಲಿ ಲಗತ್ತಿಸಲಾಗಿದೆ. ಲಾಕ್‌ಡೌನ್ ಸಮಯದಲ್ಲಿ ಸ್ವೀಕೃತವಾದ ದೂರುಗಳಿಗೆ ಕ್ರಮ ತೆಗೆದುಕೊಳ್ಳಲಾಗುತ್ತಿದೆ. |

**ಕಾಇ 325 ಎಲ್ಇಟಿ 2020**

*(ಅರಬೈಲ್ ಶಿವರಾಂ ಹೆಬ್ಬಾರ್)*
**ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು**

| ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಮಾನ್ಯ ಶ್ರೀ ಭೋಜೇಗೌಡ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 928 ಕ್ಕೆ ಉತ್ತರ. | | | | | | |
|---|---|---|---|---|---|---|
| ಅನುಬಂಧ-1 | | | | | | |
| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ವರ್ಷ | ಕನಿಷ್ಠವೇತನ ಕಾಯ್ದೆಯಡಿ ದಾಖಲಾದ ಅರ್ಜಿಗಳ ಸಂಖ್ಯೆ | ವೇತನವನ್ನು ಪಾವತಿಸದ ಬಗ್ಗೆ ದಾಖಲಾದ ಅರ್ಜಿಗಳ ಸಂಖ್ಯೆ | ಕೆಲಸದ ನಿರಾಕರಣೆ/ಕೆಲದದಿಂದ ತೆಗೆದುಹಾಕಿರುವ ಬಗ್ಗೆ ದಾಖಲಾದ ಪ್ರಕರಣಗಳ ಸಂಖ್ಯೆ | ಉಪಧನ ಪಾವತಿ ಕಾಯ್ದೆಯಡಿ ದಾಖಲಾದ ಕ್ಲೇಂ ಅರ್ಜಿಗಳ ಸಂಖ್ಯೆ |
| | 1 | 2 | 3 | 4 | 5 | 6 |
| 1 | ಹಾಸನ | 2018-19 | 40 | 11 | 23 | 0 |
| | | 2019-20 | 53 | 22 | 4 | 0 |
| | | 2020-21 | 15 | 12 | 0 | 0 |
| 2 | ಚಿಕ್ಕಮಗಳೂರು | 2018-19 | 23 | 1 | 17 | 99 |
| | | 2019-20 | 27 | 21 | 24 | 0 |
| | | 2020-21 | 1 | 0 | 4 | 0 |
| 3 | ಕೊಡಗು | 2018-19 | 8 | 2 | 5 | 17 |
| | | 2019-20 | 21 | 5 | 3 | 35 |
| | | 2020-21 | 3 | 0 | 3 | 9 |
| 4 | ದಕ್ಷಿಣ ಕನ್ನಡ | 2018-19 | 134 | 5 | 35 | 193 |
| | | 2019-20 | 30 | 19 | 13 | 188 |
| | | 2020-21 | 7 | 11 | 8 | 37 |
| 5 | ಉಡುಪಿ | 2018-19 | 14 | 17 | 16 | 48 |
| | | 2019-20 | 4 | 7 | 13 | 7 |
| | | 2020-21 | 7 | 2 | 4 | 1 |
| 6 | ಶಿವಮೊಗ್ಗ | 2018-19 | 10 | 9 | 4 | 29 |
| | | 2019-20 | 20 | 22 | 9 | 18 |
| | | 2020-21 | 20 | 5 | 0 | 0 |
| 7 | ಧಾರವಾಡ | 2018-19 | 124 | 5 | 38 | 63 |
| | | 2019-20 | 191 | 7 | 49 | 44 |
| | | 2020-21 | 26 | 7 | 17 | 47 |
| | | 2018-19 | 0 | 0 | 7 | 17 |

| | | | | | | |
|---|---|---|---|---|---|---|
| 8 | ಗದಗ | 2019–20 | – | – | 5 | 19 |
| | | 2020–21 | 0 | 0 | 1 | 2 |
| | | 2018–19 | 0 | 0 | 3 | 259 |
| 9 | ಹಾವೇರಿ | 2019–20 | – | – | 8 | 26 |
| | | 2020–21 | 0 | 0 | 2 | 4 |
| | | 2018–19 | 0 | 0 | 7 | 51 |
| 10 | ಕಾರವಾರ | 2019–20 | 8 | 0 | 7 | 52 |
| | | 2020–21 | 2 | 0 | 1 | 0 |
| | | 2018–19 | 42 | 4 | 17 | 177 |
| 11 | ಬೆಳಗಾವಿ | 2019–20 | 53 | 5 | 14 | 118 |
| | | 2020–21 | 11 | 5 | 11 | 10 |
| | | 2018–19 | 0 | 42 | 12 | 153 |
| 12 | ವಿಜಯಪುರ | 2019–20 | – | 31 | 22 | 62 |
| | | 2020–21 | – | 32 | 22 | 57 |
| | | 2018–19 | – | 1 | 10 | 31 |
| 13 | ಬಾಗಲಕೋಟೆ | 2019–20 | – | 2 | 4 | 21 |
| | | 2020–21 | 0 | 6 | 11 | 4 |
| | | 2018–19 | 88 | – | 17 | 41 |
| 14 | ಕಲಬುರಗಿ ಜಿಲ್ಲೆ | 2019–20 | 14 | 5 | 10 | 51 |
| | | 2020–21 | – | 1 | 2 | 22 |
| | | 2018–19 | – | – | 6 | 158 |
| 15 | ಬೀದರ್ | 2019–20 | 1 | 2 | 3 | 166 |
| | | 2020–21 | 2 | – | – | 163 |
| | | 2018–19 | 17 | – | 8 | 25 |
| 16 | ಯಾದಗಿರಿ | 2019–20 | 1 | – | 4 | 40 |
| | | 2020–21 | 11 | – | – | 43 |
| | | 2018–19 | 8 | – | 10 | 15 |
| 17 | ರಾಯಚೂರು | 2019–20 | 23 | 17 | 5 | 19 |
| | | 2020–21 | 3 | – | 2 | – |
| | | 2018–19 | 11 | 2 | 4 | 5 |
| 18 | ಕೊಪ್ಪಳ | 2019–20 | 2 | – | 6 | 13 |
| | | 2020–21 | 25 | 1 | 3 | 3 |
| | | 2018–19 | 19 | – | 22 | 29 |

| | | | | | | |
|---|---|---|---|---|---|---|
| 19 | ದಾವಣಗೆರೆ | 2019–20 | 27 | 1 | 17 | 14 |
| | | 2020–21 | 9 | 2 | 11 | – |
| | | 2018–19 | 19 | – | 61 | 33 |
| 20 | ಬಳ್ಳಾರಿ | 2019–20 | 81 | – | 61 | 57 |
| | | 2020–21 | 9 | 2 | 1 | – |
| | | 2018–19 | 7 | – | 1 | 4 |
| 21 | ಚಿತ್ರದುರ್ಗ | 2019–20 | 21 | – | 12 | 1 |
| | | 2020–21 | 7 | 1 | 4 | – |
| | | 2018–19 | 208 | 72 | 603 | 568 |
| 22 | ಬೆಂಗಳೂರು ನಗರ | 2019–20 | 267 | 240 | 310 | 257 |
| | | 2020–21 | 56 | 14 | 93 | 30 |
| | ರಾಮನಗರ | 2018–19 | 130 | 7 | 60 | 11 |
| 23 | | 2019–20 | 97 | 138 | 439 | 370 |
| | | 2020–21 | 18 | 27 | 90 | 85 |
| | | 2018–19 | 6 | 8 | 13 | 144 |
| 24 | ತುಮಕೂರು | 2019–20 | 77 | 0 | 16 | 51 |
| | | 2020–21 | 23 | 1 | 8 | 0 |
| | | 2018–19 | 15 | 0 | 12 | 22 |
| 25 | ಚಿಕ್ಕಬಳ್ಳಾಪುರ | 2019–20 | 34 | 6 | 5 | 124 |
| | | 2020–21 | 0 | 0 | 2 | 3 |
| | | 2018–19 | 5 | 7 | 52 | 0 |
| 26 | ಗಳೂರು ಗ್ರಾಮಾಂ | 2019–20 | 9 | 3 | 55 | 0 |
| | | 2020–21 | 3 | 2 | 13 | 0 |
| | | 2018–19 | 12 | 1 | 1 | 26 |
| 27 | ಕೋಲಾರ | 2019–20 | 93 | 4 | 1 | 35 |
| | | 2020–21 | 0 | 2 | 3 | 2 |
| | | 2018–19 | 79 | 14 | 33 | 112 |
| 28 | ಮೈಸೂರು | 2019–20 | 156 | 11 | 65 | 223 |
| | | 2020–21 | 24 | 8 | 15 | 44 |
| | | 2018–19 | 62 | 5 | 13 | 59 |
| 29 | ಮಂಡ್ಯ | 2019–20 | 52 | 14 | 5 | 63 |
| | | 2020–21 | 46 | 8 | 2 | 3 |

| | | | | | | |
|---|---|---|---|---|---|---|
| | | 2018–19 | 28 | 0 | 5 | 21 |
| 30 | ಚಾಮರಾಜನಗರ | 2019–20 | 36 | 0 | 4 | 29 |
| | | 2020–21 | 17 | 0 | 0 | 7 |
| | **ಒಟ್ಟು** | | **2852** | **944** | **2641** | **5089** |

## ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಮಾನ್ಯ ಶ್ರೀ ಭೋಜೇಗೌಡ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 928 ಕ್ಕೆ ಉತ್ತರ.

### ಅನುಬಂಧ-2

### ಕನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳವತಿಯಿಂದ ಫಲಾನುಭವಿಗಳಗೆ ಸಿಗುವ ಸೌಲಭ್ಯಗಳು

1. **ಪಿಂಚಣಿ ಸೌಲಭ್ಯ: ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ** ಮಾಸಿಕ **ರೂ.2,000/-**
2. **ಕುಟುಂಬ ಪಿಂಚಣಿ ಸೌಲಭ್ಯ:** ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ **ರೂ.1000/-**
3. **ದುರ್ಬಲತೆ ಪಿಂಚಣಿ:** ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ **ರೂ.2,000/-** ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ **ರೂ.2,00,000/-** ದವರೆಗೆ ಅನುಗ್ರಹ ರಾಶಿ ಸಹಾಯಧನ.
4. **ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ** ಮರುಪಾವತಿ ಸೌಲಭ್ಯ.
5. **ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.30,000/- ವರೆಗೆ**
6. **ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ:** ನೋಂದಾಯಿತ ಫಲಾನುಭವಿಯ ಅವಲಂಬಿತರಿಗೆ
7. **ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/-** ದವರೆಗೆ ಮುಂಗಡ ಸೌಲಭ್ಯ
8. **ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್):** ಮಹಿಳಾ ಫಲಾನುಭವಿಯ ಮೊದಲ ಎರಡು ಮಕ್ಕಳಿಗೆ ಹೆಣ್ಣು ಮಗುವಿನ ಜನನಕ್ಕೆ **ರೂ. 30,000/-** ಮತ್ತು ಗಂಡು ಮಗುವಿನ ಜನನಕ್ಕೆ **ರೂ.20,000/-**
9. **ಶಿಶು ಪಾಲನಾ ಸೌಲಭ್ಯ:**
10. **ಅಂತ್ಯಕ್ರಿಯೆ ವೆಚ್ಚ : ರೂ.4,000/-** ಹಾಗೂ ಅನುಗ್ರಹ ರಾಶಿ **ರೂ.50,000/-**ಸಹಾಯಧನ
11. **ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:**

| ಕ್ರ.ಸಂ | ತರಗತಿ (ಉತ್ತೀರ್ಣಕ್ಕೆ) | ವಾರ್ಷಿಕ ಸಹಾಯ ಧನ | |
|---|---|---|---|
| | | ಗಂಡು | ಹೆಣ್ಣು |
| I. | ನರ್ಸರಿ | 3,000 | 4,000 |
| II. | 1 ರಿಂದ 4ನೇ ತರಗತಿ | 3,000 | 4,000 |
| III. | 5 ರಿಂದ 8ನೇ ತರಗತಿ | 5,000 | 6,000 |
| IV. | 9 ಹಾಗೂ 10ನೇ ತರಗತಿ | 10,000 | 11,000 |
| V. | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 10,000 | 14,000 |
| VI. | ಐಟಿಐ | 12,000 | 15,000 |
| VII. | ಪದವಿ ಪ್ರತಿ ವರ್ಷಕ್ಕೆ | 15,000 | 20,000 |
| VIII. | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 20,000 | 20,000 |
| | ಮತ್ತು ಪ್ರತಿ ವರ್ಷಕ್ಕೆ | 20,000 | 25,000 |
| IX. | ಇಂಜಿನಿಯರಿಂಗ್ ಕೋರ್ಸ್ ಬಿಇ/ ಬಿ.ಟೆಕ್ ಸೇರ್ಪಡೆಗೆ | 25,000 | 25,000 |
| | ಮತ್ತು ಪ್ರತಿ ವರ್ಷಕ್ಕೆ | 25,000 | 30,000 |
| X. | ವೈದ್ಯಕೀಯ ಕೋರ್ಸ್‌ಗೆ ಸೇರ್ಪಡೆಗೆ | 30,000 | 30,000 |
| | ಮತ್ತು ಪ್ರತಿ ವರ್ಷಕ್ಕೆ | 40,000 | 50,000 |
| XI. | ಡಿಪ್ಲೋಮಾ | 15,000 | 20,000 |
| XII. | ಎಂ.ಟೆಕ್ / ಎಂ.ಇ | 30,000 | 35,000 |
| XIII. | ಎಂ.ಡಿ (ವೈದ್ಯಕೀಯ) | 45,000 | 55,000 |

| | | | |
|---|---|---|---|
| XIV. | ಪಿಹೆಚ್‌ಡಿ (ಪ್ರತಿ ವರ್ಷಕ್ಕೆ) ಗರಿಷ್ಠ 03 ವರ್ಷ | 25,000 | 30,000 |

12. **ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ):** ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಬಿತರಿಗೆ **ರೂ.300/- ರಿಂದ ರೂ.10,000/-ವರೆಗೆ**
13. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿ **ರೂ.5,00,000/-**, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ **ರೂ.2,00,000/- ಮತ್ತು** ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ **ರೂ.1,00,000/-**
14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಇತರೆ ಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ **ರೂ.2,00,000/-**ವರೆಗೆ
15. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್):** ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ **ರೂ.50,000/-**
16. **LPG ಸಂಪರ್ಕ ಸೌಲಭ್ಯ (ಕಾರ್ಮಿಕ ಅನಿಲ ಭಾಗ್ಯ):** ಅನಿಲ ಸಂಪರ್ಕದೊಂದಿಗೆ ಎರಡು ಬರ್ನರ್ ಸ್ಟೌವ್
17. **ಬಿಎಂಟಿಸಿ ಬಸ್ ಪಾಸ್ ಸೌಲಭ್ಯ:** ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ
18. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ:** ರಾಜ್ಯದಾದ್ಯಂತ ವಿದ್ಯಾಭ್ಯಾಸದಲ್ಲಿ ತೊಡಗಿರುವ ನೋಂದಾಯಿತ ಕಾರ್ಮಿಕರ ಇಬ್ಬರು ಮಕ್ಕಳಿಗೆ ( ಈ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದೆ)
19. **ತಾಯಿ ಮಗು ಸಹಾಯ ಹಸ್ತ:** ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ **ರೂ.6,000/-** ಗಳ ಸಹಾಯಧನ.

ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಮಾನ್ಯ ಶ್ರೀ ಭೋಜೇಗೌಡ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 928 ಕ್ಕೆ

## ಅನುಬಂಧ-3(ಎ)

## ಕಾರ್ಮಿಕ ಕಲ್ಯಾಣ ಯೋಜನೆಗಳ ಅಡಿಯಲ್ಲಿ ನೀಡುವ ಧನ ಸಹಾಯದ ವಿವರಗಳು

1. **ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ** : ಕನಿಷ್ಠ ರೂ. **3,000/-**ಗಳಿಂದ ಗರಿಷ್ಠ ರೂ. **10,000/-** ವರೆಗೆ.

2. **ಕಾರ್ಮಿಕರಿಗೆ ವೈದ್ಯಕೀಯ ನೆರವು** : ಕನಿಷ್ಠ ರೂ. **500/-** ಗಳಿಂದ ಗರಿಷ್ಠ **ರೂ.10,000/-** ವರೆಗೆ.

3. **ಕಾರ್ಮಿಕರ ಅಪಘಾತ ಧನ ಸಹಾಯ** : ಕನಿಷ್ಠ ರೂ. **1,000/-** ಗಳಿಂದ ಗರಿಷ್ಠ **ರೂ 3,000/-** ವರೆಗೆ.

4. **ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ : ರೂ.5,000/-**

5. **ವಾರ್ಷಿಕ ವೈದ್ಯಕೀಯ ತಪಾಸಣೆ ಶಿಬಿರ ಹಮ್ಮಿಕೊಳ್ಳುವ ಟ್ರೇಡ್ ಯೂನಿಯನ್/ಸಂಸ್ಥೆಗಳಿಗೆ ಧನಸಹಾಯ** : ಗರಿಷ್ಠ ರೂ. **30,000/-**

6. **ವಾರ್ಷಿಕ ಕ್ರೀಡಾ ಕೂಟ ಹಮ್ಮಿಕೊಳ್ಳುವ ನೋಂದಾಯಿತ ಕಾರ್ಮಿಕ ಸಂಘಗಳಿಗೆ ಧನಸಹಾಯ** : ಗರಿಷ್ಠ ರೂ. **50,000/-** .

## ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾದ ಮಾನ್ಯ ಶ್ರೀ ಭೋಜೇಗೌಡ ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 928 ಕ್ಕೆ ಉತ್ತರ.

### ಅನುಬಂಧ–3ಬಿ

| ಕ್ರಸಂ | ವರ್ಷ | 2019–20 | |
|---|---|---|---|
| 1 | ಯೋಜನೆಗಳ ವಿವರ | ಫಲಾನುಭವಿ ಸಂಖ್ಯೆ | ಮೊತ್ತ ರೂ. |
| 2 | ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ | 26,257 | 10,51,98,000 |
| 3 | ವೈದ್ಯಕೀಯ ನೆರವು | 5 | 45,252 |
| 4 | ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ. | 295 | 14,75,000 |
| 5 | ವೈದ್ಯಕೀಯ ತಪಾಸಣಾ ಶಿಬಿರ | 400 (2 ಸಂಘಟನೆ) | 60,000 |
| 6 | ವಾರ್ಷಿಕ ಕ್ರೀಡಾ ಚಟುವಟಿಕೆ | 600 (2 ಸಂಘಟನೆ) | 1,00,000 |
| 7 | ವಾರ್ಷಿಕ ಕ್ರೀಡಾ ಚಟುವಟಿಕೆ | 600 (2 ಸಂಘಟನೆ) | 1,00,000 |
| | ಒಟ್ಟು | 27,557 | 10,68,78,252 |